# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಡಾ|| ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 25 (277) |
| ಉತ್ತರಿಸಬೇಕಾದ ದಿನಾಂಕ | 14.09.2021 |
| ಉತ್ತರಿಸುವವರು | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಂಗಾರಪೇಟೆ, ಕೋಲಾರ, ಮಾಲೂರು ಸ್ಥಳಗಳಲ್ಲಿ ಕುಡಿಯುವ ನೀರಿಗಾಗಿ ನಿರ್ಮಿಸಲಾಗುತ್ತಿರುವ "ಯರಗೋಳ್" ಯೋಜನೆಯ ಉದ್ದೇಶಗಳೇನು; (ವಿವರಗಳನ್ನು ನೀಡುವುದು) | ಮಾರ್ಕಂಡೇಯ ನದಿಗೆ ಅಡ್ಡಲಾಗಿ ಯರಗೋಳ್ ಗ್ರಾಮದ ಬಳಿ ಅಣೆಕಟ್ಟನ್ನು ನಿರ್ಮಿಸಿ ಕೋಲಾರ, ಮಾಲೂರು, ಬಂಗಾರಪೇಟೆ ಮತ್ತು ಮಾರ್ಗ ಮಧ್ಯದ 45 ಗ್ರಾಮಗಳ ಜನತೆಗೆ ಕುಡಿಯುವ ನೀರು ಒದಗಿಸಲು ಉದ್ದೇಶಿಸಲಾಗಿದೆ. |
| ಆ | ಈ ಯೋಜನೆ ಪ್ರಾರಂಭವಾಗಿನಿಂದ ಇದೂವರೆವಿಗೂ ಸರ್ಕಾರವು ವೆಚ್ಚ ಮಾಡಲಾಗಿರುವ ಹಣ ಎಷ್ಟು; (ರಾಜ್ಯ ಮತ್ತು ಕೇಂದ್ರದ ಪಾಲುಗಳನ್ನು ನಮೂದಿಸುವುದು) | ಅ) ಮೊದಲನೇ ಹಂತದ ಕಾಮಗಾರಿಯಲ್ಲಿ 500 ಎಂ.ಸಿ.ಎಫ್.ಟಿ ಸಾಮರ್ಥ್ಯದ ಅಣೆಕಟ್ಟು ನಿರ್ಮಾಣ, ಪೂರಕ ಕಾಮಗಾರಿಗಳು ಹಾಗೂ ಭೂಸ್ವಾಧೀನ ಕ್ರಮಗಳನ್ನು ಒಳಗೊಂಡಿದ್ದು ಈ ಸಂಬಂಧ ಇದೂವರೆಗಿನ ವೆಚ್ಚ ರೂ.159.98 ಕೋಟಿಗಳಾಗಿರುತ್ತದೆ.<br><br>ಆ) ಎರಡನೇ ಹಂತದ ಕಾಮಗಾರಿಯಲ್ಲಿ (UIDSSMT) ಏರು ಕೊಳವೆ ಮಾರ್ಗ, ವಿತರಣಾ ಕೊಳವೆ ಮಾರ್ಗ, ಮೇಲ್ಮಟ್ಟದ ಜಲಸಂಗ್ರಹಾಗಾರಗಳು, ಶುದ್ಧೀಕರಣ ಘಟಕಗಳು ಹಾಗೂ ಪೂರಕ ಕಾಮಗಾರಿಗಳನ್ನು ಒಳಗೊಂಡಿದ್ದು ಇದುವರೆಗಿನ ವೆಚ್ಚ ರೂ.85.92 ಕೋಟಿಗಳಾಗಿದ್ದು,ರಾಜ್ಯ ಮತ್ತು ಕೇಂದ್ರದ ಪಾಲುಗಳು ಈ ಕೆಳಕಂಡಂತಿರುತ್ತದೆ.<br><br>ರೂ.ಲಕ್ಷಗಳಲ್ಲಿ<br><br>ಕ್ರ.ಸಂ / ವಿವರ / ಮೂಲ ಅಂದಾಜಿನಂತೆ / ಪರಿಷ್ಕೃತ ಅಂದಾಜಿನಂತೆ<br>1 / ಕೇಂದ್ರ ಸರ್ಕಾರದ ಅನುದಾನ / ರೂ. 6394.24 / ರೂ. 6394.24<br>2 / ರಾಜ್ಯ ಸರ್ಕಾರದ ಅನುದಾನ / ರೂ. 799.28 / ರೂ. 799.28<br>3 / ಆರ್ಥಿಕ ಸಂಸ್ಥೆಗಳಿಂದ ಸಾಲ / / ರೂ. 4784.00<br>4 / ಸ್ಥಳೀಯ ಸಂಸ್ಥೆಗಳ ವಂತಿಕೆ / ರೂ. 799.28 / ರೂ. 799.28<br>/ **ಒಟ್ಟು** / **ರೂ 7992.80** / **ರೂ 12776.40**<br><br>ಒಟ್ಟು ವೆಚ್ಚ ರೂ.245.90 (ರೂ.159.98 + ರೂ.85.92) ಕೋಟಿಗಳು. |
| ಇ) | ಈ ಯೋಜನೆ ಅನುಷ್ಠಾನಗೊಳಿಸಲು ವಿಳಂಬವಾಗಿರುವುದಕ್ಕೆ ಕಾರಣಗಳೇನು; (ವಿವರ ನೀಡುವುದು) | ಅ) 500 ಎಮ್.ಸಿ.ಎಫ್.ಟಿ ಸಾಮರ್ಥ್ಯದ ಅಣೆಕಟ್ಟು ಪಂಪು ಮನೆ, Approach road ಇತ್ಯಾದಿ, 10 ಕಿ.ಮಿ. MS ಕೊಳವೆ ಮಾರ್ಗ ಹಾಗೂ ಸಂಬಂಧಿತ ಕಾಮಗಾರಿಗಳನ್ನು ಮೆ|| Ramky Infrastructure Ltd, Hyderabad ಇವರಿಗೆ ಕರಾರು ಒಪ್ಪಂದ ಸಂಖ್ಯೆ 09/2010-11, Dt.30.11.2010 ರನ್ವಯ ವಹಿಸಲಾಗಿರುತ್ತದೆ. |

| | | |
|---|---|---|
| | | ವಿಳಂಬಕ್ಕೆ ಕಾರಣಗಳು ಈ ಕೆಳಗಿನಂತಿರುತ್ತದೆ.<br><br>ಈ ಯೋಜನೆಯ ಅನುಷ್ಠಾನಕ್ಕೆ ಒಟ್ಟು 375 ಎಕರೆ 37 ಗುಂಟೆ ಜಮೀನಿನ ಅವಶ್ಯಕತೆ ಇರುತ್ತದೆ. ವಿವರ ಈ ಕೆಳಗಿನಂತಿದೆ.<br><br>ಖಾಸಗಿ ಜಮೀನು — 127.10 ಎಕರೆ<br>ಅರಣ್ಯ ಜಮೀನು — 153.15 ಎಕರೆ<br>ಸರ್ಕಾರಿ ಗೋಮಾಳ ಜಮೀನು — 95.12 ಎಕರೆ<br>**ಒಟ್ಟು ಜಮೀನು — 375.37 ಎಕರೆ**<br><br>i. ಸದರಿ ಘಟಕಗಳನ್ನು ಸ್ಥಾಪಿಸುವ ಸ್ಥಳವು ಹೊರವಲಯ ಪ್ರದೇಶದಲ್ಲಿದ್ದರಿಂದ ಮೊದಲು ಸರ್ಕಾರದ ಜಮೀನು ಎಂದು ಗುರುತಿಸಲಾಗಿ ತದನಂತರ ಅದು ಸೆಪ್ಟೆಂಬರ್ 2011 ರಲ್ಲಿ ಅರಣ್ಯ ಪ್ರದೇಶವೆಂದು ಗುರುತಿಸಲಾಯಿತು.<br>ii. ಸದರಿ ಸ್ಥಳವು ಅರಣ್ಯ ಪ್ರದೇಶವಾದ್ದರಿಂ, ಕೇಂದ್ರ ಪರಿಸರ ಮತ್ತು ಅರಣ್ಯ ಇಲಾಖೆಯಿಂದ ಹಲವು ಹಂತಗಳಲ್ಲಿ ಅನುಮತಿ ಪಡೆಯಲು ಅವಶ್ಯಕತೆ ಇದ್ದು ಮಾರ್ಚ್ 2013 ರಲ್ಲಿ ಹಸ್ತಾಂತರಿಸಲಾಗಿರುತ್ತದೆ. ಈ ಕಾರಣ 2 ವರ್ಷ 4 ತಿಂಗಳು ವಿಳಂಬವಾಗಿರುತ್ತದೆ.<br>iii. ಆದರೆ ಅಣೆಕಟ್ಟು, ಪಂಪು ಮನೆ, Approach Road, ಇತ್ಯಾದಿ ಘಟಕಗಳನ್ನು ನಿರ್ಮಿಸಲು ಅರಣ್ಯ ಇಲಾಖೆಯು 21.03.2013 ರಂದು ಸ್ಥಳವನ್ನು ಹಸ್ತಾಂತರಿಸಿದ್ದರಿಂದ ಸದರಿ ಘಟಕಗಳ ನಿರ್ಮಾಣದಲ್ಲಿ ವಿಳಂಬವಾಗಿರುತ್ತದೆ.<br>iv. ಸದರಿ ಘಟಕಗಳನ್ನು ನಿರ್ಮಿಸುವ ಸ್ಥಳವು ಅರಣ್ಯ ಪ್ರದೇಶವಾಗಿದ್ದರಿಂದ ಅಲ್ಲಿ ಮೂಲ ಸೌಕರ್ಯದ ಅಭಾವವಿದ್ದುದರಿಂದ ಕಾರ್ಮಿಕರು ಪದೇ ಪದೇ ಬಿಟ್ಟು ಹೋಗುತ್ತಿದ್ದರು. ಇದರಿಂದಾಗಿ ಕಾಮಗಾರಿಯನ್ನು ಪುನಃ ಪ್ರಾರಂಭಿಸಲು ಸಾಕಷ್ಟು ಕಾಲಾವಕಾಶ ಬೇಕಾಗಿದ್ದುದರಿಂದ ವಿಳಂಬವಾಗಿರುತ್ತದೆ.<br>v. ಮುಂದುವರೆದಂತೆ, ಸದರಿ ಕಾಮಗಾರಿಗಳ ನಿರ್ಮಾಣಕ್ಕೆ Blasting of hard rock ಅವಶ್ಯವಿದ್ದು ಅದನ್ನು ಕೈಗೊಳ್ಳಲು 2014 ರಲ್ಲಿ ಲೋಕಸಭೆ ಚುನಾವಣೆ ಮಾದರಿ ನೀತಿ ಸಂಹಿತೆ ಜಾರಿಯಲ್ಲಿದ್ದರಿಂದ Blasting ಪರವಾನಿಗೆ ನೀಡುವಲ್ಲಿ ಹಾಗೂ Explosives ಸಾಗಿಸುವಲ್ಲಿ ವಿಳಂಬವಾಗಿರುತ್ತದೆ.<br>vi. ದಿನಾಂಕ 30.10.2014 ರಿಂದ 21.05.2015 ರವರೆಗೆ 33 Grade cement ಅಭಾವವಿದ್ದರಿಂದ ಘಟಕಗಳ ನಿರ್ಮಾಣದಲ್ಲಿ ವಿಳಂಬವಾಗಿರುತ್ತದೆ.<br>vii. ಗುತ್ತಿಗೆದಾರರಿಂದ ವಿವಿಧ ಹಂತಗಳಲ್ಲಿ ಆದ ವಿಳಂಬಕ್ಕೆ ದಂಡವನ್ನು ವಿಧಿಸಲಾಗಿರುತ್ತದೆ.<br>viii. NIRM (National Institute of Rock Mechanics) ರವರು ಅಕ್ಟೋಬರ್ 2017 ರಲ್ಲಿ ನೀಡಿದ ಶಿಫಾರಸ್ಸಿನಂತೆ ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿದ್ದರಿಂದ ವಿಳಂಬವಾಗಿರುತ್ತದೆ.<br><br>ಆ) ಎರಡನೇ ಹಂತದ ಕಾಮಗಾರಿಗಳು (UIDSSMT ಯೋಜನೆ): ಸದರಿ ಯೋಜನೆಯಡಿ MS ಕೊಳವೆ ಮಾರ್ಗ, ಬಂಗಾರಪೇಟೆ ಪಟ್ಟಣದಲ್ಲಿ 13 MLD ಜಲ ಶುದ್ಧೀಕರಣ ಘಟಕ, ಕೋಲಾರ ನಗರದಲ್ಲಿ 29.42 MLD ಜಲ ಶುದ್ಧೀಕರಣ ಘಟಕ, ಕೋಲಾರ , ಮಾಲೂರು ಮತ್ತು ಬಂಗಾರಪೇಟೆ ನಗರಗಳಲ್ಲಿ ಮೇಲ್ಮಟ್ಟದ ಜಲಸಂಗ್ರಹಾರಗಳು ಮತ್ತು ವಿತರಣಾ ಜಾಲ ಅಳವಡಿಸುವ ಕಾಮಗಾರಿಯನ್ನು ಮೆ\|\| Engineering projects (India) Ltd, Hyderabad ಇವರಿಗೆ ಗುತ್ತಿಗೆ ಸಂಖ್ಯೆ 07/08-09, Dt. 19.01.2009 ರನ್ವಯ ವಹಿಸಲಾಗಿರುತ್ತದೆ. |

ಸದರಿ ಗುತ್ತಿಗೆಯಲ್ಲಿ ವಿಳಂಬಕ್ಕೆ ಕಾರಣಗಳು ಈ ಕೆಳಗಿನಂತಿರುತ್ತವೆ.

i. ಬಂಗಾರಪೇಟೆಯಲ್ಲಿ 13 MLD ಸಾಮರ್ಥ್ಯದ ಜಲಶುದ್ಧೀಕರಣ ಘಟಕಗದ ನಿರ್ಮಾಣಕ್ಕೆ ಅವಶ್ಯವಿರುವ ಜಮೀನನ್ನು April 2015 ರಲ್ಲಿ ಹಸ್ತಾಂತರಿಸಿದ್ದರಿಂದ ಹಾಗೂ ಕೋಲಾರ ನಗರದಲ್ಲಿ 4 ಮೇಲ್ಮಟ್ಟ ಜಲಸಂಗ್ರಹಾಗಾರಗಳನ್ನು ನಿರ್ಮಿಸಲು ಅಗತ್ಯವಿದ್ದ ಜಮೀನನ್ನು ಸಂಬಂಧಿಸಿದ ಸ್ಥಳೀಯ ಸಂಸ್ಥೆಗಳಿಂದ June 2019 ರಲ್ಲಿ ಹಸ್ತಾಂತರಿಸಿದ್ದರಿಂದ ಮೆ|| Engineering Projects (India) Ltd, Hyderabad ಗುತ್ತಿಗೆದಾರರು ಈ ಕಾಮಗಾರಿಗಳನ್ನು ನಿರ್ವಹಿಸಲು ನಿರಾಕರಿಸಿರುತ್ತಾರೆ.

ii. ಗುತ್ತಿಗೆದಾರರಿಂದ ವಿಳಂಬವಾಗಿರುವ ಅವಧಿಗೆ ದಂಡವನ್ನು ವಿಧಿಸಲಾಗಿರುತ್ತದೆ.

iii. ಈ ಕಾರಣದಿಂದ ಮೆ|| Engineering Projects (India) Ltd, Hyderabad ಅವರ ಗುತ್ತಿಗೆಯಿಂದ ಸದರಿ ಕಾಮಗಾರಿಗಳನ್ನು ಅಕ್ಟೋಬರ್ 2018 ರಲ್ಲಿ ಹಿಂಪಡೆಯಲಾಗಿರುತ್ತದೆ.

iv. ಬಂಗಾರಪೇಟೆಯಲ್ಲಿ 13 MLD ಸಾಮರ್ಥ್ಯದ ಜಲ ಶುದ್ಧೀಕರಣ ಘಟಕವನ್ನು ಬೇರೆ ಗುತ್ತಿಗೆದಾರರಿಗೆ ಮಾರ್ಚ್ 2019 ರಲ್ಲಿ ವಹಿಸಲಾಗಿರುತ್ತದೆ.

v. ಕೋಲಾರ ನಗರದಲ್ಲಿನ ಉಳಿದ 4 ಸಂಖ್ಯೆ ಮೇಲ್ಮಟ್ಟದ ಜಲಸಂಗ್ರಹಾರಗಳ ನಿರ್ಮಾಣಕ್ಕೆ ತಗುಲುವ ವೆಚ್ಚವು ಮೂಲ ಯೋಜನಾ ಅಂದಾಜು ಪಟ್ಟಿಯಲ್ಲಿನ ಮೊತ್ತಕ್ಕಿಂತ ಹೆಚ್ಚು ಆಗಿರುವುದರಿಂದ, ಸರ್ಕಾರದಿಂದ ರೂ.127.76 ಕೋಟಿಗಳಿಗೆ ಜನವರಿ 2021 ರಲ್ಲಿ ಅನುಮೋದನೆಗೊಂಡ ಪರಿಷ್ಕೃತ ಅಂದಾಜು ಪಟ್ಟಿಯ ಅನುಸಾರ ಟೆಂಡರ್‌ನ್ನು ಸದ್ಯದಲ್ಲಿಯೇ ಆಹ್ವಾನಿಸಲಾಗುವುದು.

vi. ಬಂಗಾರಪೇಟೆ-ಕೋಲಾರ, ಬಂಗಾರಪೇಟೆ-ಮಾಲೂರು ನಡುವೆ ಕೊಳವೆ ಮಾರ್ಗಗಳನ್ನು ಅಳವಡಿಸಲು ರೈಲ್ವೆ ಇಲಾಖೆಯ ವತಿಯಿಂದ ಅನುಮತಿಯು ಮಾರ್ಚ್ 2020 ರಲ್ಲಿ ದೊರೆತಿರುವುದರಿಂದ ಕಾಮಗಾರಿಯಲ್ಲಿ ವಿಳಂಬವಾಗಿರುತ್ತದೆ.

**ಈ)** ಈ ವಿಳಂಬದಿಂದಾಗಿ ಸದರಿ ಯೋಜನೆಗೆ ತಗಲಿರುವ ಹೆಚ್ಚುವರಿ ವೆಚ್ಚ ಎಷ್ಟು (Extra cost than the original cost)

ಮೊದಲನೇ ಹಂತದ ಹಾಗೂ ಎರಡನೇ ಹಂತದ ಯೋಜನೆಗಳಿಗೆ ಹೆಚ್ಚುವರಿ ವೆಚ್ಚದ ವಿವರ ಈ ಕೆಳಕಂಡಂತಿರುತ್ತದೆ.

**ರೂ.ಕೋಟಿಗಳಲ್ಲಿ**

| ಕ್ರ. ಸಂ | ಯೋಜನೆಯ ಹೆಸರು | ಅಂದಾಜು ಮೊತ್ತ | ಪರಿಷ್ಕೃತ ಅಂದಾಜು ಮೊತ್ತ | ಹೆಚ್ಚುವರಿ ಮೊತ್ತ |
|---|---|---|---|---|
| 1 | ಮೊದಲನೇ ಹಂತದ ಯೋಜನೆ | 160. 00 | 186. 00 | 26. 00 |
| 2 | ಎರಡನೇ ಹಂತದ ಯೋಜನೆ | 79.92 | 127.76 | 47.84 |
| | **ಒಟ್ಟು** | **239.92** | **313.76** | **73.84** |

**ಉ)** ಈ ಯೋಜನೆಯನ್ನು ಯಾವ ಸಮಯದೊಳಗೆ ಲೋಕಾರ್ಪಣೆ ಮಾಡಲಾಗುವುದು ?

ಯೋಜನೆಗಳ ಸಿವಿಲ್ ಕಾಮಗಾರಿಗಳು ಅಂತಿಮ ಹಂತದಲ್ಲಿದ್ದು, ಪಂಪಿಂಗ್ ಮೆಷಿನರಿ ಮತ್ತು 11 ಕೆ.ವಿ ವಿದ್ಯುತ್ತಿನ ಕೆಲಸಗಳು ಪ್ರಗತಿಯಲ್ಲಿದ್ದು, ಡಿಸೆಂಬರ್ 2021 ರಲ್ಲಿ ಪೂರ್ಣಗೊಳಿಸಿ ಯೋಜನೆಯನ್ನು ಲೋಕಾರ್ಪಣೆ ಮಾಡಲು ಕ್ರಮಕೈಗೊಳ್ಳಲಾಗುವುದು.

ಸಂಖ್ಯೆ: ನಅಇ 118 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು